# ಮುಂಜಾವು

ವಾರಪತ್ರಿಕೆ.

ಸಂಪಾದಕ: ನಿಡಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್ ಎಸ್ — ೧೯

೨ನೇ ವರ್ಷ ಸಂಚಿಕೆ ೪ ಕೊಪ್ಪ ೧೧-೯-೮೩ ಭಾನುವಾರ ಬೆಲೆ ೪೦ ಪೈಸೆ

ನ. ರಾ. ಪುರದಲ್ಲಿ ಶಿಕ್ಷಕರ ದಿನಾಚರಣೆ:

## ನಿವೃತ್ತ ಶಿಕ್ಷಕರಿಗೆ ಸನ್ಮಾನ

ನ. ರಾ. ಪುರ: ಇಲ್ಲಿ ಸೆ. ೫ ರಂದು ನಡೆದ ಶಿಕ್ಷಕರ ದಿನಾಚರಣೆಯ ಸಂದರ್ಭದಲ್ಲಿ ತಾ॥ ನ ಶಿಕ್ಷಕರ ಸಂಘ ಮತ್ತು ಶಿಕ್ಷಕರ ದಿನಾಚರಣೆ ಸಮಿತಿಗಳ ಆಶ್ರಯದಲ್ಲಿ ನಿವೃತ್ತ ಅಧ್ಯಾಪಕರುಗಳಾದ ಶ್ರೀಮತಿ ಸುಶೀಲಾ ಬಾಯಿ, ಎಸ್. ಹೆಚ್. ಶೇಷಾದ್ರಿ, ಸಿ.ಜಿ. ಕೃಷ್ಣಯ್ಯಗೌಡ, ಅಬ್ದುಲ್ ಘವೂಫ್, ಮತ್ತು ಮಹಮದಾಲಿ ಇವರುಗಳನ್ನು ಆತ್ಮೀಯವಾಗಿ ಸನ್ಮಾನಿಸಲಾಯಿತು.

## ನಿವೃತ್ತ ನೌಕರರ ಸಂಘದ ಬೇಡಿಕೆ ಈಡೇರಿಸಲು ಶಾಸಕರಿಗೆ ಒತ್ತಾಯ

ಕೊಪ್ಪ: ಇಲ್ಲಿನ ತಾ॥ ನಿವೃತ್ತ ನೌಕರರ ಸಂಘದ ಪದಾಧಿಕಾರಿಗಳು ಶಾಸಕ ಗೋವಿಂದ ಗೌಡರನ್ನು ಆ. ೨೮ ರಂದು ಭೇಟಿ ಮಾಡಿ, ತಮ್ಮ ಈ ಕೆಳಗಿನ ಬೇಡಿಕೆಗಳ ಈಡೇರಿಕೆಗೆ ಸರ್ಕಾರವನ್ನು ಒತ್ತಾಯಿಸಲು ಮನವಿ ಮಾಡಿದರು: ೧)ಕೇಂದ್ರ ಸರ್ಕಾರದ ನೌಕರರಿಗೆ ಹೊಸ ನಿವೃತ್ತಿ ವೇತನ ಕೊಡುವಂತೆ ೧೭–೧೨–೮೨ ರಲ್ಲಿ ಸುಪ್ರೀಂ ಕೋರ್ಟ್ ಆಜ್ಞೆ ಮಾಡಿದ್ದು ಇದನ್ನು ರಾಜ್ಯದಲ್ಲೂ ಅನ್ವಯಿಸುವುದು; ೨) ಮಾಹೆಯಾನ ಕನಿಷ್ಠ ೫೦ ರೂ. ಆರೋಗ್ಯಭತ್ಯ; ೩) ಕಮ್ಯೂಟೆಡ್ ಪೆನ್ಶನನ್ನು ೧೫ ವರ್ಷದ ನಂತರ ಹಿಡಿಯುವುದನ್ನು ನಿಲ್ಲಿಸುವುದು; ೪) ನಿವೃತ್ತರಾಗುವಾಗ (ಫ್ಯಾಮಿಲಿ ಪೆನ್ಶನ್ ಬಗ್ಗೆ) ಗ್ರಾಚ್ಯುಟಿಯಲ್ಲಿ ಹಿಡಿದಿಡುವ ೬ ತಿಂಗಳ ಸಂಬಳವನ್ನು ಎಲ್ಲರಿಗೂ ಹಿಂದಿರುಗಿಸುವುದು.

## ಲಯನ್ಸ್ ಕ್ಲಬ್‌ನಿಂದ ಶಿಕ್ಷಕರ ದಿನಾಚರಣೆ

ಕೊಪ್ಪ: ಇಲ್ಲಿನ ಲಯನ್ಸ್ ಕ್ಲಬ್ಬಿನವರು ಸೆ. ೫ ರಂದು ಮನಮೋಹನ ಕಲ್ಲೆಯವರ ಅಧ್ಯಕ್ಷತೆಯಲ್ಲಿ ಶಿಕ್ಷಕರ ದಿನ ಆಚರಿಸಿದರು. ಕ್ಲಬ್ಬಿನ ವಲಯಾಧ್ಯಕ್ಷ ಹೆಚ್. ಬಿ. ರಾಜಗೋಪಾಲ್ ಮುಖ್ಯ ಅತಿಥಿಗಳಾಗಿದ್ದರು. ಈ ಸಂದರ್ಭದಲ್ಲಿ ೧೯೮೩ ರಲ್ಲಿ ನಿವೃತ್ತರಾದ ತಾ॥ನ ಅಧ್ಯಾಪಕರುಗಳಾದ ಆರ್. ಕೃಷ್ಣ ಶೆಟ್ಟಿ, ವೈ. ಎಸ್. ಸುಬ್ಬರಾವ್, ಯು.ಆರ್. ಕೃಷ್ಣರಾವ್, ವಿ.ಆರ್. ಸುಬ್ರಾಯಭಟ್ ಇವರುಗಳನ್ನು ಸನ್ಮಾನಿಸಲಾಯಿತು.

**ರಸ್ತೆ ಫಲಕ ಕೊಡುಗೆ**

ಇಲ್ಲಿನ ಪುರಸಭೆಯವರೊಂದಿಗೆ ಹಲವು ರಸ್ತೆ ಸೂಚನಾ ಫಲಕಗಳನ್ನು ಬರೆಸಿ ರಕ್ಷಣಾ ಇಲಾಖೆಗೆ ವಹಿಸುವ ಯೋಜನೆಯನ್ನು ಕ್ಲಬ್ ಇದೇ ದಿನ ಪೂರೈಸಿತು.

## "ಮೃತ್ಯು ಸೇತುವೆಗಳು ಇಲ್ಲೂ ಇವೆ"

**ವರದಿ: ಟಿ. ಎ. ವಿ. ನಾಯಕ್**

ಕುದುರೆಗುಂಡಿ: ಇಲ್ಲಿಂದ ಕೊರ್ಡಬಿತ್ಲಿಗೆ ಹೋಗುವ ರಸ್ತೆಯಲ್ಲಿನ ಕಿರು ಸೇತುವೆಯ ಕೈಪಿಡಿ ಬಿದ್ದುಹೋಗಿದ್ದು, ಶಾಲಾ ಬಾಲಕನೊಬ್ಬ ಅದರಿಂದ ಬಿದ್ದ ಪರಿಣಾಮವಾಗಿ ಸಾವಿನ ಬಾಯಿಗೆ ಹೋಗಿ ಬಂದಂತೆ ಬದುಕಿಕೊಂಡ ಸುದ್ದಿ 'ಮುಂಜಾವು' ಜುಲೈ ೨೪ರ ಸಂಚಿಕೆಯಲ್ಲಿ ಪ್ರಕಟವಾದ ನಂತರ ಆ ಸೇತುವೆಗೆ ಕೈಪಿಡಿಯ ದುರಸ್ತಿಗಾಗಿ ೧೪ ಸಾವಿರ ರೂ. ಗಳಷ್ಟು ಅಲ್ಪ ಹಣ (ಎತ್ತಲೂ ಸಾಲದಷ್ಟು) ಮಂಜೂರಾಗಿದೆಯೆಂದು ಹೇಳಲಾಗಿದೆ.

ಆದರೆ ಅಂಥವೇ 'ಮೃತ್ಯು ಸೇತುವೆ'ಗಳು ಕುದ್ರೆಗುಂಡಿ–ಕಾಂಡ್ಯ ಹಾಗೂ ಕಾನೂರು–ಕಟ್ಟೆಮನೆ ಲೋಕೋಪಯೋಗಿ ರಸ್ತೆಗಳಲ್ಲೂ ಇವೆಯೆಂದು ತಿಳಿದು ಬಂದಿದೆ. ಇವುಗಳ ರಿಪೇರಿಗೆ ನರಬಲಿಯೇ ಆಗಬೇಕೆ? ಎಂಬುದು ಮಾತ್ರ ಇಲಾಖೆಯಿಂದ ತಿಳಿದು ಬಂದಿಲ್ಲ!

ಸಂಬಂಧಪಟ್ಟವರು ನರಬಲಿ ಕೇಳದೆ ಈ ಸೇತುವೆಗಳ ದುರಸ್ತಿ ಮಾಡಲಿ ಎಂದು ಬಡ ಹಳ್ಳಿಗರ ಅಳಲು.

## ಬೆಲೆ ಏರಿಕೆ: ಬಿಜೆಪಿ ಪ್ರತಿಭಟನೆ

ಕೊಪ್ಪ: ಏರುತ್ತಿರುವ ಬೆಲೆಗಳನ್ನು ನಿಯಂತ್ರಿಸಿ ಸುಲಭ ಬೆಲೆಗಳಲ್ಲಿ ಜೀವನಾವಶ್ಯಕ ಸಾಮಗ್ರಿಗಳನ್ನು ವಿತರಿಸಲು ಒತ್ತಾಯಿಸಿ ಕೊಪ್ಪದಲ್ಲಿ ಭಾರತೀಯ ಜನತಾ ಪಾರ್ಟಿಯ ಕಾರ್ಯಕರ್ತರು ಪಕ್ಷದ ಧ್ವಜ ಮತ್ತು ಬೆಲೆ ಏರಿಕೆ ವಿರುದ್ಧ ಘೋಷಣೆಗಳನ್ನು ಬರೆದ ಫಲಕಗಳನ್ನು ಹಿಡಿದು ಸೆ. ೪ ರಂದು ಮೆರವಣಿಗೆ ನಡೆಸಿದರು.

ನಂತರ ಬಸ್ ನಿಲ್ದಾಣದಲ್ಲಿ ಏರ್ಪಡಿಸಲಾಗಿದ್ದ ಸಾರ್ವಜನಿಕ ಸಭೆಯ ಅಧ್ಯಕ್ಷತೆಯನ್ನು ರಘುರಾಮ ಶೆಟ್ಟಿ ವಹಿಸಿದ್ದರು. ಚಂದ್ರಶೇಖರ್ ಸ್ವಾಗತಿಸಿ, ಕೆ. ಶಿವಸ್ವಾಮಿ ವಂದಿಸಿದರು.

'ಮುಂಜಾವು'ಗೆ ಚಂದಾದಾರರಾಗಿರಿ

# ೧ ಲಕ್ಷ ೧೫ ಸಾವಿರ ರೂ. — ಆಹಾ!

## ತೀರ್ಥಹಳ್ಳಿ ಬಳಿ ನಡೆದ ಭೀಕರ ಕೊಲೆಯ ಸಂಕ್ಷಿಪ್ತ ವರದಿ

> **ಅವರೇನು ಕೊಲೆ ಮಾಡಬೇಕೆಂದು ಲಾರಿ ಹತ್ತಿದವರಲ್ಲ. ಆದರೆ ಆ ೧ ಲಕ್ಷ ೧೫ ಸಾವಿರ! ಅದನ್ನು ಹೇಗಾದರೂ ಹಾರಿಸಲೇ ಬೇಕಾಗಿತ್ತು.**

ತೀರ್ಥಹಳ್ಳಿ ತಾ॥ ಆನಂದ ಪುರಂ "ರೈತ ಬಂಧು ಗ್ರಾಮೋದ್ಯೋಗ" ಸಂಸ್ಥೆಯವರು ಕೇರಳಕ್ಕೆ ಅಕ್ಕಿ ಸಾಗಿಸುತ್ತಾರೆ. ಕನ್ನಡ ಜಿಲ್ಲೆಯ ವಿವಿಧೆಡೆಗೆ ಅವಲಕ್ಕಿ ಸರಬರಾಜು ಮಾಡುತ್ತಾರೆ. ತಮ್ಮ ಸ್ವಂತ ಲಾರಿಗಳಲ್ಲದೆ ಬಾಡಿಗೆ ಲಾರಿಗಳನ್ನೂ ಇದಕ್ಕೆ ಬಳಸುತ್ತಾರೆ.

ಜುಲೈ ೧೩ ರಂದು ಅವರ ಮೂರು ಲಾರಿಗಳು ಕೇರಳಕ್ಕೆ ಅಕ್ಕಿ ಸಾಗಿಸುವಾಗ ಉಳ್ಳಾಲ ಪೋಲೀಸರು ಅವನ್ನು ವಶಪಡಿಸಿಕೊಂಡರು. ಆಗಸ್ಟ್ ೨೫ ರಂದು ಅವುಗಳ ಬಿಡುಗಡೆಯಾಯಿತು. ಲಾರಿಗಳು ಅಕ್ಕಿ ಮಾರಿ ಮಂಗಳೂರಿಗೆ ವಾಪಾಸು ಬಂದವು.

ಈ ಕಡೆಯಿಂದ ಆ. ೨೭ ರಂದು ಇನ್ನೆರಡು ಲಾರಿಗಳಲ್ಲಿ ಅವಲಕ್ಕಿ ತುಂಬಕೊಂಡು ಸೇಲ್ಸ್‌ಮನ್‌ಗಳಾದ ಲೋಕೇಶ ಮತ್ತು ಶಿವಪ್ಪ ಕನ್ನಡ ಜಿಲ್ಲೆಯಲ್ಲಿ ವಿತರಣೆ ಮಾಡುತ್ತಾ ಹೋದರು. ಈ ಎರಡು ಲಾರಿಗಳಲ್ಲಿ ಒಂದು "ಜುಬೇದ". ಹಿಂದೆ ಗ್ರಾಮೋದ್ಯೋಗದಲ್ಲಿ ಡ್ರೈವರ್‌ಗಳಾಗಿದ್ದ, ಸಾಗರದವರಾದ ಮಹಮದ್ ಮತ್ತು ಚಂದ್ರಶೇಖರ ಇದರ ಪಾಲುದಾರರು. ಅದರ ಬಾಬ್ತು ಇನ್ನೂ ಸುಮಾರು ೧ ಲಕ್ಷ ರೂ. ತೀರಿಸಬೇಕಿತ್ತಂತೆ. ಅಂದು ಲಾರಿ ಒಯ್ದವನು ಮಹಮದ್.

೨೭ ರಂದು ವಾಪಾಸು ಬರುವಾಗ ಅವನಿಗೆ ಶಿವಮೊಗ್ಗಕ್ಕೆ ಗೊಬ್ಬರದ ಲೋಡು ಬಾಡಿಗೆ ಸಿಕ್ಕಿತು. ಆದರೆ ಅದಕ್ಕೆ ಮೊದಲು ಅಲ್ಲಿ ಅಕ್ಕಿ ಮತ್ತು ಅವಲಕ್ಕಿ ಮಾರಿದ ಹಣ ಒಟ್ಟು ೧ ಲಕ್ಷದ ೧೫ ಸಾವಿರ ರೂ. ಗಳನ್ನು ಗ್ರಾಮೋದ್ಯೋಗದ ಪ್ರತಿನಿಧಿ ರಾಮಭಟ್ಟರು ಸೇಲ್ಸ್‌ಮನ್ ಲೋಕೇಶನ ಕೈಲಿ ಕೊಟ್ಟದ್ದನ್ನು ನೋಡಿದ್ದ. ತಲೆಯಲ್ಲಿ ಹುಳ ಹೊಕ್ಕಿತ್ತು.

ಕುಂದಾಪುರಕ್ಕೆ ಬಂದಾಗ ಮೂರು ಲಾರಿಗಳ ಪೈಕಿ ಒಂದು ಸಿಕ್ಕಿತು. ಉಳಿದೆರಡೂ ಮಿನಿ ಲಾರಿಗಳು. ಅವು ಆಗುಂಬೆ ಮುಖಾಂತರ ಹೋಗುತ್ತವೆಂದು ಕಂಡಕ್ಟರ್ ಪ್ರಶಾಂತನಿಂದ ತಿಳಿದುಕೊಂಡ ಮಹಮದ್. ಹಣದೊಂದಿಗೆ ಲೋಕೇಶನೂ ಅದರಲ್ಲೊಂದರಲ್ಲಿ ಹೋದುದೂ ತಿಳಿಯಿತು.

ಅದೇ ಹೊತ್ತಿಗೆ ಆತನ ಪಾಲುದಾರ ಚಂದ್ರಶೇಖರ ತನ್ನ ತಮ್ಮನ ಚಿಕಿತ್ಸೆಗಾಗಿ ಕುಂದಾಪುರಕ್ಕೆ ಬಂದಿದ್ದವನು ಸಿಕ್ಕಿದ. ಇಬ್ಬರೂ ಮಾತಾಡಿದರು, ಹಂಚಿಕೆ ಹೂಡಿದರು.

ಒಳದಾರಿಯಿಂದ ಬಂದು ಸೋಮೇಶ್ವರದ ಬಳಿ ಲೋಕೇಶ ಮತ್ತು ಚಾಲಕ ಮಂಜುನಾಥ ಇದ್ದ ಮಿನಿ ಲಾರಿ ಹತ್ತಿಕೊಂಡು ಹೊರಟರು. ಆದರೆ ಸೀಟಿನ ಬುಡದಲ್ಲಿಡಲ್ಪಟ್ಟಿದ್ದ ಹಣ ಹಾರಿಸಲು ಸಾಧ್ಯವಾಗಿಲ್ಲ. ಸೋಮೇಶ್ವರದಲ್ಲಿ ಡ್ರೈವರ್ ವಿಶ್ವನಾಥ ರೈ ಮತ್ತು ಸೇಲ್ಸ್‌ಮನ್ ಶಿವಪ್ಪ ಇದ್ದ ಇನ್ನೊಂದು ಮಿನಿ ಲಾರಿಯೂ ಸೇರಿಕೊಂಡಿತು. ರಾತ್ರಿ ೨ ಗಂಟೆ ಹೊತ್ತಿಗೆ ತೀರ್ಥಹಳ್ಳಿ ತಲುಪಿ, ರಾತ್ರಿ ಹೋಟೆಲಲ್ಲಿ ಕಾಫಿ ಕುಡಿದು ಆನಂದಪುರಂ ಕಡೆ ಹೊರಟರು. ಮಂಜುನಾಥನಿಗೇಕೋ ಆಗಲೇ ನಿದ್ರೆ ಎಳೆಯುತ್ತಿತ್ತು. ಚಂದ್ರಶೇಖರನೇ ಲಾರಿ ನಡೆಸಿದ.

ಅರಗ ದಾಟಿ, ಸಂಕದ ಹೊಳೆಯ ಆಚೆ ಸ್ವಲ್ಪ ಹೊತ್ತು ನಿದ್ರೆ ಮಾಡಿ ಹೋಗೋಣವೆಂದು ಲಾರಿ ನಿಲ್ಲಿಸಿದರು. ಎಲ್ಲರೂ ನಿದ್ರೆಯಲ್ಲಿರುವಾಗ ಮಹಮದ್ ಮತ್ತು ಚಂದ್ರಶೇಖರ ಲೋಕೇಶನನ್ನೂ ಮಂಜುನಾಥನನ್ನೂ ಲಾರಿಯ ಚಕ್ರಕ್ಕೆ ಕೊಡುವ ಕಟ್ಟೆಯಿಂದ ಬಡಿದು, ಚೂರಿಯಿಂದ ಇರಿದು ಸತ್ತರೆಂದು ಕೊಂಡರು. ಅಲ್ಲಿಂದ ಲಾರಿ ಹೊರಡಿಸಿ ಚಂದ್ರಶೇಖರ ಲಾರಿ ಓಡಿಸಿದ. ಇನ್ನೊಂದು ಲಾರಿಯೂ ಜೊತೆಯಲ್ಲಿಯೇ ಹೊರಟು ಬಂತು. ಆದರೆ ಲೋಕೇಶ್ ಸತ್ತಿರಲಿಲ್ಲ. ಅರಗ ಗೇಟ್ ದಾಟಿದ ನಂತರ ಅತನಿಗೆ ಪ್ರಜ್ಞೆ ಬಂದು 'ಅಣ್ಣಾ ನನ್ನ ಬಿಡಿ' ಎಂದು ಕೂಗಿದಾಗ ಪುನಃ ಬಡಿದು ಸಾಯಿಸಿದರು. ಅರಗ ದಾಟಿ ಸೊಣಬೂರಿನ ಮಾರ್ಗದಲ್ಲಿ ಹೋಗಿ ಪುನಃ ಹಿಂದೆ ಬಂದು ಬಂದ್ಯಾ ಮಾರ್ಗದಲ್ಲಿ ಚಂದ್ರಶೇಖರ ಲಾರಿ ಓಡಿಸಿದಾಗ ವಿಶ್ವನಾಥ ರೈ ಗೆ ಅನುಮಾನ ಬಂತು. ಆಗಿನ್ನೂ ಬೆಳಗಿನ ೭ ಗಂಟೆಯೂ ಆಗಿರಲಿಲ್ಲ. ದುರ್ಗಮವಾದ ಆ ದಾರಿಯಲ್ಲಿ ರೈ ಹಿಂಬಾಲಿಸಿದ. ನೇರಳೆಬಳಿ ಚಂದ್ರಶೇಖರನ ಲಾರಿ ಸ್ಕಿಡ್ ಆಗಿ ದರೆಗೆ ಒರಗಿ ನಿಂತಿತು. ಕೂಡಲೇ ಆರೋಪಿಗಳಿಗೂ ಇವರಿಬ್ಬರಿಗೂ ಸ್ವಲ್ಪ ಹೊತ್ತು ಘರ್ಷಣೆ ಆಗಿರಬೇಕು. ಅಂತೂ ರೈ ಮತ್ತು ಶಿವಪ್ಪ ಕೂಡ ಕೊಲೆಯಾದರು. ಅವರನ್ನೂ ಲಾರಿಯಲ್ಲಿ ತುಂಬಿಕೊಂಡು ಪುನಃ ಲಾರಿ ಓಡಿಸಿದರು. ಅದು ಸೌತಿಹಳ್ಳದ ಬಳಿ ಹೂತು ಹೋಯಿತು. ಅಲ್ಲಿಂದ ನಾಲ್ಕು ಮೈಲು ನಡೆದು ಜಯನಗರ ಸೇರಿ, ಕುಂದಾಪುರಕ್ಕೆ ಬಂದು, ಗೊಬ್ಬರ ತುಂಬಿ ನಿಲ್ಲಿಸಿದ್ದ 'ಜುಬೇದಾ'ವನ್ನು ಶಿವಮೊಗ್ಗಕ್ಕೆ ತಲುಪಿಸಿ, ಟ್ಯಾಂಕ್ ಭರ್ತಿ ಡೀಸೆಲ್ ತುಂಬಿಕೊಂಡು

(೪ನೇ ಪುಟಕ್ಕೆ)

> ಹಗೆಯಲ್ಲ, ಜಗಳವಿಲ್ಲ; ಎಲ್ಲರೂ ಸ್ನೇಹಿತರೇ. ನಗುನಗುತ್ತಾ ಇದ್ದಂತೇ ಅವು ಹೇಗೆ ಹೊಡೆದು ಕೆಡಹಿದರೋ. ಕಟುಕ ಹೃದಯವೇ!
>
> ಚಂದ್ರಶೇಖರನ ತಮ್ಮನಿಗೆ ಆಗಲೇ ಕಾಯಿಲೆಯಾಗಿ, ಕುಂದಾಪುರಕ್ಕೇ ಒಯ್ಯಬೇಕೆ? ಅದೇ ಸಮಯಕ್ಕೇ ಅವರಿಬ್ಬರ ಭೇಟಿಯಾಗಬೇಕೆ? [ಅದಕ್ಕೂ ಮೊದಲು ಮಹಮದನಿಗೆ ಲಾರಿಯ ಕಂಡಕ್ಟರನೂ ಭೇಟಿಯಾಗಿರಬೇಕೇ?] ಇದರಲ್ಲಿ ಯಾವುದೊಂದು ತಪ್ಪಿದ್ದರೂ ಈ ಕೊಲೆಗಳೂ ತಪ್ಪುತ್ತಿದ್ದವೇನೋ! ಎಂದು ಅನಿಸುತ್ತದೆಯಲ್ಲವೆ?

ಕಾಲಕ್ಷೇಪ

# ಮಾ ಸಾ ಶ ನ

ಜ ಯಂ ತ

**೫೦ ವರ್ಷ ದುಡಿದ ರೈತರಿಗೆ, ರೈತ-ಕಾರ್ಮಿಕರಿಗೆ ಪಿಂಚಣಿ ಕೊಟ್ಟರೆ, ಅವರು ತಮ್ಮ ಉಳಿದ ಜೀವಮಾನ ಪೂರ್ತಿ ಕೂತು ಉಣ್ಣಲು ತೊಡಗಿದಾಗ ರಾಷ್ಟ್ರೀಯ ಉತ್ಪನ್ನ ಕಡಿಮೆಯಾಗುವುದಿಲ್ಲವೆ?**

**ಮೊ**ನ್ನೆ ಒಬ್ಬನೇ ಸುಕುರನ ಹೋಟಿಲಿನಲ್ಲಿ 'ಎಣ್ಣೆ' ಹಾಕುತ್ತಾ ಕುಳಿತಿದ್ದೆ. ಅಷ್ಟರಲ್ಲಿ ಶನಿ ವಕ್ರಿಸಿದಂತೆ ಬಗ್ಗೆ ಬಾಲು ವಕ್ರಿಸಿದ. ಹೇಳಿಕೇಳಿ ಅಂವ ಎಮ್ಮೆಲ್ಲೆ ಆಪ್ತ ಕಾರ್ಯದರ್ಶಿ. ಶುರುವಾಯಿತು ತಾಜಾ ರಾಜಕೀಯ ವಿದ್ಯಮಾನಗಳ ಚರ್ಚೆ. ಅದೂ ಇದೂ ಆಗಿ, 'ಮಾಜಿ'ಗಳಿಗೆ ಮಾಸಾಶನ ಕೊಡುವ ಶಾಸನದಯವರೆಗೂ ಬಂತು.

ನಾನೆಂದೆ: ಅಲ್ಲಯ್ಯ, ಮೊನ್ನೆ ಅಸೆಂಬ್ಲೀಲಿ ಭೀ. ಖಂಡ್ರೆ- 'ನಮಗೆ ಮಾಸಾಶನ ಬೇಡ, ನೀವು ಅದನ್ನು ತೆಗೆಯಬೇಕು.' ಎಂದಿದ್ದು ಕೇಳಿದಿಯೇನಯ್ಯ?

ಹೌದು, ಅದಕ್ಕೆ ಮಂತ್ರಿಗಳೂ ಸರಿಯಾಗಿ ಉತ್ತರಿಸಿದ್ದಾರಲ್ಲ. "ಎಷ್ಟೋ ಜನ ಶಾಸಕರು ತಾವು ಶಾಸಕರಾದ ಮೇಲೆ ತಮ್ಮ 'ಮೂಲ ವೃತ್ತಿ' ಬಿಟ್ಟು ಸಾರ್ವಜನಿಕ 'ಸೇವಕ' ರಾಗಿರುತ್ತಾರೆ. ಅವರ ಜೀವನ ನಿರ್ವಹಣೆಗೆ ಬೇಕು. ಅಲ್ಲದೆ ಅವರ 'ಸೇವೆ'ಗೆ ಸಮಾಜದಿಂದಲೂ ಮನ್ನಣೆ ಸಿಗಬೇಕು" ಅಂತ ಹೇಳಿದ್ದಾರೆಲ್ಲ —ಎಂದ ಬಾಲು.

ಆದರೆ ಎಲ್ಲ ಮಾಜಿ ಶಾಸಕರಿಗೂ ಯಾಕಯ್ಯ ಕೊಡಬೇಕು? ಇಲ್ಲಾ ೧೦ ಸಾವಿರಕ್ಕಿಂತ ಕಡಿಮೆ ಆದಾಯ ಇರುವವರಿಗೆ, ಇಲ್ಲಾ ಈ ಮಾಜಿ ಶಾಸಕನಿಗೆ ಮಾಸಾಶನ ನೀಡಬೇಕು ಎಂದು ಜನತೆಯಿಂದ ಒತ್ತಾಯ ಬಂದವರಿಗೆ —ಹೀಗೆ ಏನಾದರೂ ನ್ಯಾಯವಾದ ಕಾರಣವಿದ್ದವರಿಗೆ ಕೊಟ್ಟರೆ ಏನೋ ಹೌದು" ಎಂದೆ ನಾನು.

ಬಾಲು ಮಹಾ ರಾಜಕೀಯ ಮರಿ ಮುತ್ಸದ್ದಿ-ಪ್ರುಟ್‌ಲಾಯರುಗಳಂತೆ. ಅವನೆಂದ: ನೋಡು, ಖಂಡ್ರೆಯವರದ್ದಾದರೂ 'ವಿರೋಧಕ್ಕೋಸ್ಕರ ವಿರೋಧ' ಹೊರತು ಬೇರೇನು ತತ್ವಕ್ಕಾಗಿ ಅಲ್ಲ. ಹಿಂದೆ ದೇ. ಅರಸರು ಈ ಮಸೂದೆ ತಂದಾಗ ಕೆಲವು ವಿರೋಧ ಪಕ್ಷದ ಸದಸ್ಯರು ಅದನ್ನು ವಿರೋಧಿಸಿದ್ದರು. ಈಗ ಅವರೇ ಅಧಿಕಾರದಲ್ಲಿರುವುದರಿಂದ ಆ ಶಾಸನವನ್ನು ಈಗ ಕಾಂಗ್ರೆಸ್ಸಿನವರು ವಿರೋಧಿಸುತ್ತಾರೆ, ಅಷ್ಟೆ. ಇದಕ್ಕೇ ಅನ್ನೋದು ನೋಡು 'ರಾಜಕೀಯ' ಅಂತ.

"ಅಲ್ಲಯ್ಯ, ನಾವು ೫೦ ವರ್ಷ ದಾಟಿದ ರೈತರಿಗೆ, ರೈತ-ಕಾರ್ಮಿಕರಿಗೆ ನಿವೃತ್ತಿ ವೇತನದ ಬೇಡಿಕೆ ಇಟ್ರೆ 'ಆಗುಲ್ಲ' ಅಂತಾರಲ್ಲಯ್ಯ? ಅಲ್ಲದೆ ನಮಗೆ ಯಾವುದೇ ಒಂದು ಸೌಲಭ್ಯ ಕೊಡಬೇಕಾದರೂ ಸಾರಾಸಗಟು ಎಲ್ಲರಿಗೂ ಕೊಡದೆ ಅರ್ಹತೆ, ಅದೂ ಇದೂ ಅಂತ ನಿಬಂಧನೆ ಹಾಕ್ತಾರೆ. ಶಾಸಕರಿಗಾದರೆ ಸಾರಾ ಸಗಟು ಎಲ್ಲರಿಗೂ ಕೊಡ್ತಾರೆ" ಎಂದೆ ನಾನು.

"ಹೋಹೋ, ನೀನೊಬ್ಬ ಭಾರಿ ದೊಡ್ಡ ರೈತಮುಖಂಡ, ಗೊತ್ತು ಮಾರಾಯ. ಆದಿರ್ಲಿ. ಈಗ ಇದನ್ನಿಷ್ಟು ಮುಗಿಸು." ಎನ್ನುತ್ತಾ ತನ್ನ ಲೋಟ ಎತ್ತಿ ಗಟಗಟ ಕುಡಿದು ಕೆಳಗಿಟ್ಟ.

ಅದರ ಪರಿಣಾಮವೋ ಏನೋ ಎಂಬಂತೆ ಈಗ ಅವನು ತನ್ನ ಹೊಸ ಸಿದ್ಧಾಂತ ಮಂಡಿಸಿದ—**"ನೋಡು, ನೀನು ಹೇಳಿದ ಹಾಗೆ ರೈತರಿಗೆ, ರೈತ ಕಾರ್ಮಿಕರಿಗೆಲ್ಲ ನಿವೃತ್ತಿ ವೇತನ ಕೊಟ್ಟದ್ದೇ ಆದರೆ ರಾಷ್ಟ್ರೀಯ ಉತ್ಪನ್ನ ಕಡಿಮೆ ಆಗುತ್ತೆ ಹೇಗೆ ಅಂತೀಯ? ಈಗಲಾದರೆ ಅವರು ಅನಿವಾರ್ಯವಾಗಿ, ಐವತ್ತಲ್ಲ ನೂರು ವರ್ಷವಾದರೂ ಕೆಲಸ ಮಾಡಲೇ ಬೇಕು. ಐವತ್ತಕ್ಕೆಲ್ಲ ಪಿಂಚಣಿ ಕೊಟ್ಟಲ್ಲಿ ಉಳಿದ ಆಯುಸ್ಸನ್ನು ಕೆಲಸ ಮಾಡದೆ ಕೂತು ತಿಂದರೆ ಏನಾಗುತ್ತೆ ಹೇಳು?** ಅಲ್ಲದೆ ಈ 'ಮಾಜಿ'ಗಳಿಗೆ ಮಾಸಾಶನ ಕೊಡುತ್ತಿರುವ ಶಾಸನದಿಂದ ನಮ್ಮ ಅತ್ಯಂತ ಜನಪ್ರಿಯ ಮಾಜಿ ಮುಖ್ಯ ಮಂತ್ರಿಯೊಬ್ಬರಿಗೆ ಅದ್ಭುತವಾದ ರೀತಿಯಲ್ಲಿ ಶ್ರದ್ಧಾಂಜಲಿ ಅರ್ಪಿಸಿದ ಹಾಗಾಗಿದೆ. ಅವರು ಬಹಳ ಮುಂದಾಲೋಚನೆಯಿಂದಲೇ ಈ ಶಾಸನ ಮಾಡಿದ್ದಾರೆ. ಅದೂ ಅಲ್ಲದೆ ಈಗ ರಾಜಕೀಯ ಕೂಡ ಒಂದು 'ವೃತ್ತಿ' ಅಲ್ಲವೇನಯ್ಯ?"

ಹೀಗೆಂದವನೇ ಏಳುತ್ತಾ, "ಹೋಗಲಿ,

(ಇನ್ನೇ ಪುಟಕ್ಕೆ)

## ನೆನಪು

ಧಾರಾಕಾರವಾದ ಮಳೆ
ನೋಡುತ್ತಾ ಕುಳಿತೆ
ಭ್ರಮಾಧೀನ ನಾದೆ
ಒಂದೊಂದು ಹನಿಗಳೂ
ಒಂದೊಂದು ನೆನಪಾದವು.

ಹಕ್ಕಿಗಳು ಹೃದಯದಿಂದ
ಹೃದಯಕ್ಕೆ ಹಾರಿ ಹರೆಯದ
ಫಲವುಂಡು ಭುವಿಯಿಂದ
ಬಾಂದಳಕ್ಕೆ ಮೈ ಚಾಚಿ
ಸ್ನೇಹದ ಗೆಲ್ಲುಗಳಲ್ಲಿ ಕೊಕ್ಕನ್ನು
ತೀಡಿ ನಮ್ಮದೇ ಈ ಪರಿಸರ
ಎಂಬಂತೆ ಶೃತಿಗಾನ ಹಾಡಿ
ನಲಿವಿನಕಮನೆಯ ಸುಪ್ಪತ್ತಿಗೆ
ಯಲ್ಲಿ ಪವಡಿಸುತ್ತಿದ್ದವು.
ಇಂತಹ ಚಿತ್ರ ಮನದಂಗಳದಲ್ಲಿ
ಮನೆ ಮಾಡಿದಾಗ ಎಲ್ಲೆಲ್ಲೂ ಕನ್ನಡಿ
ಯಾಗಿ ಅದರಲ್ಲೆಲ್ಲಾ ಏಕಮೇವ
ಶಕ್ತಿಯಾಗಿ ನನ್ನದೇ ರೂಪ ಕಂಡು
ಎತ್ತರಕ್ಕೆ ಏರುತ್ತಿದ್ದೆ.
ಹಿಗ್ಗಿಹಿರಿ ಹಿಗ್ಗುತ್ತಿದ್ದೆ.
ಮಿದುಳ ಬಳ್ಳಿಯಲ್ಲಿ ಏಂತದೋ
ಸ್ಫೋಟವಾದಂತಾಗಿ ವಾಸ್ತವ
ಲೋಕಕ್ಕೆ
ಬಂದಾಗ ಮಳೆ ಬಿಟ್ಟಿತ್ತು.
ನೆನಪುಗಳೆಲ್ಲಾ ರಭಸದಿಂದ ಹರಿಯುವ
ಕಳಕು ನೀರಿನಲ್ಲಿ ಕಸ ಕಡ್ಡಿಗಳಾಗಿ
ತೇಲಿ ಹೋಗುತ್ತಿದ್ದವು.
ನಿರುದ್ಯೋಗಿಯಾದ ನನ್ನನ್ನು
ಅಣಕಿಸುತ್ತಿದ್ದವು.

—ಎಲ್. ಎನ್. ಸದಾಶಿವ ಭಾಸರಿ,
ಲೋಕೇಶ್ವರ.

## ರಾಜಕಾರಣ

ಅಂದು ಹಾಲು ಕೊಟ್ಟ ಮುದಿ
ದನಗಳಿಗೆ,
ಕೊಟ್ಟೆವು ಹಿಂಡಿ ಹುಲ್ಲು,
ಮುವತ್ತಾರು ವರ್ಷಗಳವರೇಗೆ.
ಅವು ಕೊಬ್ಬಿ,
ರಕ್ತ ಪಿಪಾಸು ಹೆಬ್ಬುಲಿಗಳಾದಾಗ
ಒದ್ದೋಡಿಸಿ,
ಬೇರೆ ಹಸುಗಳನ್ನು ತಂದರೆ,
ಅವು ಹಾಲನ್ನು ಕೊಡದೇ,
ಸಗಣಿಯನ್ನೂ ಹಾಕದೇ,
ಪರಸ್ಪರ ಹಾಯ ತೊಡಗಿದವು
ಒದೆಯ ತೊಡಗಿದವು.
ಕೋಲಾರದಲ್ಲಿ ಮಾತ್ರವಲ್ಲ
ಸೊರಬದಲ್ಲೂ ಚೊಕ್ಕ
ಬಂಗಾರ ಸಿಕ್ಕಿದೆ
ಎಂದು ತಿಳಿದಾಗ
ನಮ್ಮ ಮನ ಅರಳಿದ್ದವು.
ಆದರದು ಕಾಗೆ ಬಂಗಾರವೆಂದು
ಅರಿವಾದಾಗ?
ನಮ್ಮ ಪ್ರಜಾಪ್ರಭುತ್ವದಲ್ಲಿ
ನಾಯಕ ಶಿರೋಮಣಿಗಳ(?)
(ಅವರೇ ಕರೆದು ಕೊಳ್ಳುವಂತೆ)
ರೀತಿ, ನೀತಿ, ಮತಿ,
ಪ್ರಜೆಗಳ ಪ್ರಗತಿಯ ಗತಿ
ನೆನೆಸಿ ಕೊಂಡಾಗಲೆಲ್ಲಾ
ಉಕ್ಕೇರುವ
ಕ್ರೋಧ ರೋಷಗಳು
ಸಂಕಟವಾಗುತ್ತಾ
ಹೊಟ್ಟೆ ತೊಳಸಿದಂತಾಗಿ
ಕಾರಿ ಕೊಳ್ಳುವಂತಾಗುತ್ತದೆ.

—ಸುಬ್ರಹ್ಮಣ್ಯ ಬಾ. ನ. ಶಾಸ್ತ್ರಿ.

## "ಪರಿಣಾಮ"

ವಿಶ್ವದ ವಿಖ್ಯಾತ ವಿಜ್ಞಾನಿಗಳ ಸಾಲಿಗೆ ಸೇರಿದ ಭಾರತದ (ನಮ್ಮ ಕರ್ನಾಟಕದ) ದಿ॥ ಸರ್ ಸಿ. ವಿ. ರಾಮನ್‌ರವರು ಬೆಳಕಿನ ವಿಜ್ಞಾನದಲ್ಲಿ ಕಂಡುಹಿಡಿದಿರುವ ಒಂದು ಹೊಸ ವಿಷಯಕ್ಕೆ "ರಾಮನ್ ಪರಿಣಾಮ" (ರಾಮನ್ಸ್ ಎಫೆಕ್ಟ್) ಎಂದು ಹೆಸರು. ಅವರು ತಮ್ಮ ಸಂಶೋಧನೆಯನ್ನು ವಿದೇಶದಲ್ಲೊಂದು ಕಡೆ ಹಲವಾರು ದೇಶಗಳ ವಿಜ್ಞಾನಿಗಳ ಎದುರು ಪ್ರದರ್ಶಿಸಿ ರುಜುವಾತು ಪಡಿಸಬೇಕಿತ್ತು. ಆ ಕಾರ್ಯಕ್ರಮದಲ್ಲಿ ಅವರು ಆದಿನದ ತಮ್ಮ ಪ್ರಯೋಗಕ್ಕೆ ಮದ್ಯವನ್ನು ಆಯ್ದುಕೊಂಡು, ಮದ್ಯದ ಮೂಲಕ ಬೆಳಕು ಹಾಯುವಾಗ ಉಂಟಾಗುವ 'ರಾಮನ್ ಪರಿಣಾಮ'ವನ್ನು ಪ್ರದರ್ಶಿಸಿದರು.

ಯಶಸ್ವಿ ಪ್ರದರ್ಶನದ ನಂತರ ಅವರ ಹಲವು ವಿಜ್ಞಾನಿ ಮಿತ್ರರು ಅವರನ್ನು ಮದ್ಯಪಾನಕ್ಕೆ ಆಹ್ವಾನಿಸಿದರು. ಆದರೆ ರಾಮನ್ ಒಪ್ಪಲಿಲ್ಲ. ಆಗ ಒಬ್ಬ ಮಿತ್ರರು— "ಇರಲಿರಲಿ ರಾಮನ್, ಇಷ್ಟೊತ್ತು ನಾವು ಮದ್ಯದ ಮೇಲೆ ರಾಮನ್ ಪರಿಣಾಮ ನೋಡಿದ್ದಾಯಿತು. ಈಗ ರಾಮನ್ ಮೇಲೆ ಮದ್ಯದ ಪರಿಣಾಮ ನೋಡೋಣವಂತೆ!" ಎಂದಾಗ ಎಲ್ಲರ ನಗುವಿನ ಅಬ್ಬರದಲ್ಲಿ ತೇಲಿಹೋದ ನಮ್ಮ ರಾಮನ್ ತಾವೂ ಅವರನ್ನು ಕೂಡಿಕೊಳ್ಳುವುದು ಅನಿವಾರ್ಯವಾಯಿತು.

(ಬಹಳ ಹಿಂದೆ ಓದಿದ್ದು.)

—ನಾಗರಾಜ್

ಇದು ಭಾರತ!

## ರಾಜಕಾರಣಿಗಳ ಭಾರತ!

ಉತ್ತರಪ್ರದೇಶದ ಸೀತಾಪುರದಲ್ಲಿ ಒಂದು ಹೊಸ ಚಿಕಿತ್ಸಾಲಯ. ಇದನ್ನು ಯಾರು ಉದ್ಘಾಟಿಸಬೇಕು ಎಂಬ ವಿಷಯದಲ್ಲಿ ಕಾಂಗ್ರೆಸ್ (ಐ)ಗೂ ಬಿಜೆಪಿಗೂ ಚಕಮಕಿ. ಪರಿಣಾಮವಾಗಿ ಹೃದಯಾಘಾತದಿಂದ ಒಂದು ಸಾವು.

ರಾಜಕಾರಣಿಗಳು ಉದ್ಘಾಟನೆ ಬಗ್ಗೆ ಕಚ್ಚಾಡುತ್ತ ನನೆಗುದಿಗೆ ಬಿದ್ದಾಗ, ಸೀತಾಪುರದ ಚೀಫ್ ಮೆಡಿಕಲ್ ಆಫೀಸರ್ ಡಾ॥ ಶ್ರೀವಾಸ್ತವ ಅವರೇ ಚಿಕಿತ್ಸಾಲಯವನ್ನು ಉದ್ಘಾಟಿಸಿದರು. ರಾಜಕಾರಣಿಗಳು ತವ ಜಗಳವನ್ನು ಮುಗಿಸುವವರೆಗೆ ಕಾಯದೆ ತಾವೇ ಉದ್ಘಾಟನೆ ನೆರವೇರಿಸಿದ "ಅಪರಾಧ"ಕ್ಕಾಗಿ ಡಾ॥ ಶ್ರೀವಾಸ್ತವ ಅವರನ್ನು ಕೆಲಸದಿಂದ ತೆಗೆದು ಹಾಕಲಾಯಿತು. ಡಿಸ್‌ಮಿಸ್ ಆಜ್ಞೆಯನ್ನು ಕೇಳಿದ ಕೂಡಲೇ ಅವರು ತಮ್ಮ ಕುರ್ಚಿಯಲ್ಲಿ ಕುಸಿದು ಬಿದ್ದರು. ಅನಂತರ ಅವರು ಚೇತರಿಸಿಕೊಳ್ಳಲೇ ಇಲ್ಲ. ಎರಡು ದಿನಗಳ ನಂತರ ಅವರ ಪ್ರಾಣ ಹೋಯಿತು.

ಈ ಚಿಕಿತ್ಸಾಲಯ ಮುಖ್ಯವಾಗಿ ಭಾರತೀಯ ಜನತಾ ಪಕ್ಷದ ಶಾಸಕ ರಾಜೇಂದ್ರ ಗುಪ್ತ ಅವರ ಪರಿಶ್ರಮದ ಫಲ. ಆದ್ದರಿಂದ ಅವರೇ ಅದನ್ನು ಉದ್ಘಾಟಿಸಲು ಅರ್ಹರು ಎಂದು ಬಿಜೆಪಿ ಸದಸ್ಯರ ತಗಾದೆ. ಆದರೆ ಕಾಂಗ್ರೈ ಪ್ರಧಾನ ಕಾರ್ಯದರ್ಶಿ ಹಾಗೂ ಈ ಕ್ಷೇತ್ರದ ಸಂಸತ್ಸದಸ್ಯೆ ರಾಜೇಂದ್ರ ಕುಮಾರಿ ಬಾಜಪೈ ಅವರೇ ಉದ್ಘಾಟಿಸಬೇಕೆಂದು ಕಾಂಗ್ರೈನವರ ಹಟ. ಯಾರು ಉದ್ಘಾಟನೆ ಮಾಡಬೇಕು ಎಂಬುದಕ್ಕಿಂತ, ಚಿಕಿತ್ಸಾಲಯದ ಆರಂಭವೇ ಮುಖ್ಯವೆಂದು ಭಾವಿಸಿದ ಡಾ॥ ಶ್ರೀವಾಸ್ತವ ತಾವೇ ಅದನ್ನು ಉದ್ಘಾಟಿಸಿದರು. ಸಿಟ್ಟಾದ ಸಂಸತ್ ಸದಸ್ಯೆಯಿಂದ ಉ. ಪ್ರದೇಶದ ಆರೋಗ್ಯ ಮಂತ್ರಿ ಲೋಕಪತಿ ತ್ರಿಪಾಠಿಯವರಿಗೆ ಸೂಚನೆ ಹೋಯಿತು. ಲಕ್ನೋದಿಂದ ಆರೋಗ್ಯ ಇಲಾಖೆ ಡೈರೆಕ್ಟರು ಸೀತಾಪುರಕ್ಕೆ ಬಂದು ಮರುದಿನವೇ ತನಿಖೆ ಆರಂಭಿಸಿದರು. ತನಿಖೆ ನಡೆಯುತ್ತಿರುವಾಗಲೇ ಡಾ॥ ಶ್ರೀವಾಸ್ತವ ಅವರಿಗೆ ಲಕ್ನೋದಿಂದ ಜರೂರು ಕರೆ. ಮೇಲಧಿಕಾರಿಗಳ ಬಾಯಿಂದ ಎರಡು ವಾಕ್ಯ ಕೇಳುತ್ತಿದ್ದಂತೆಯೇ ಡಾ॥ ಶ್ರೀವಾಸ್ತವ ಕುರ್ಚಿಯಲ್ಲಿ ಕುಸಿದು ಬಿದ್ದರು. ಮತ್ತೆ ಏಳಲೇ ಇಲ್ಲ

(—"ದಿ ವೀಕ್" ಪತ್ರಿಕೆ
ಸೌಜನ್ಯ: **'ಪ್ರಜಾವಾಣಿ'**.)

## 'ಸಾರ್ವಜನಿಕ' ಭಾರತ!!

ನಮ್ಮ ದೇಶದಲ್ಲಿ ೨೭,೦೦೦ ಕೋಟಿ ರೂ. ಸಾರ್ವಜನಿಕ ಹಣ—ದೇಶದ ಬೊಕ್ಕಸದ ಹಣ—೧೧ ಅತಿ ಶ್ರೀಮಂತ ಮನೆತನಗಳ ವಹಿವಾಟಿನಲ್ಲಿ ತೊಡಗಿಸಲ್ಪಟ್ಟಿದೆ. ಈ ವಹಿವಾಟುಗಳಲ್ಲಿ ಅವರ ಸ್ವಂತ ಬಂಡವಾಳ ಕೇವಲ ೧೪೮ ಕೋಟಿ ರೂ. ಗಳು ಮಾತ್ರ.

## ಓದುಗರ ಪುಟ

# "ಶೃಂಗೇರಿಯಲ್ಲಿ ಹಾಲಿನ ಸಮಸ್ಯೆ ನಿವಾರಿಸಿ"

'ಮುಂಜಾವು' ಸಂಪಾದಕರಿಗೆ,

ಮಾನ್ಯರೇ,

ಶೃಂಗೇರಿಯಲ್ಲಿ ಡೈರಿಗಳಿಗೆ ಕೊರತೆಯಿಲ್ಲ ದಿದ್ದರೂ ಹಾಲಿನ ತೊಂದರೆ ಹೇಳತೀರದು. ೧೦-೧೨ ಡೈರಿಯವರು ಸೈಕಲ್‌ಗಳಲ್ಲಿ ಹೊತ್ತಿಗೆ ಪ್ರತಿಯೊಬ್ಬರು ೩೦ ರಿಂದ ೪೦ ಲೀಟರುಗಳವರೆಗೆ ಹಾಲನ್ನು ತರುತ್ತಾರೆ. ಸಣ್ಣಪುಟ್ಟ ಡೈರಿಯವರೂ ಬೇಕಾದಷ್ಟಿದ್ದಾರೆ.

ಆದರೆ ಯಾರ ಹತ್ತಿರ ಹಾಲನ್ನು ತೆಗೆದುಕೊಂಡರೂ ಆ ಹಾಲು ಕೆನೆಗಟ್ಟುವುದೂ ಇಲ್ಲ, ಕುದಿಸಿದರೂ ಸಹ ಹಾಲು ಒಕ್ಕುವುದಿಲ್ಲ. ಇಂತಹ ನೀರು ಹಾಲು ಬೇರೆ ಯಾವ ಊರುಗಳಲ್ಲೂ ದೊರಕಲಾರದು. ನಾವುಗಳು ಹಾಲು ಮಾರಾಟಗಾರರಿಗೆ ಅನೇಕ ಬಾರಿ ಹೇಳಿ ಆಯಿತು. ಅವರುಗಳು ಆ ಬಗ್ಗೆ ನಿರ್ಲಕ್ಷ್ಯದಿಂದಿದ್ದಾರೆ. ಹೆಚ್ಚು ಹೇಳಿದರೆ ಮರುದಿನದಿಂದ ಹಾಲೇ ಇಲ್ಲ. ಮುನಿಸಿಪಾಲಿಯವರಿಗೆ ಅರ್ಜಿ ಬರೆಯುತ್ತೇವೆ ಎಂದರೆ "ಅವರಿಗೆ ನಾವು ತಿಂಗಳ ಮಾಮೂಲಿ ಕೊಡುತ್ತೇವೆ" ಎಂದು ಹೇಳಿ ಅವರು ಕೊಡುವ **ಮಾಮೂಲಿಯ ಅಂಕಿ-ಅಂಶಗಳನ್ನೂ ನಿರ್ಭಯವಾಗಿ ಹೇಳುತ್ತಾರೆ. !**

ಈಗ್ಗೆ ೪ ವರ್ಷಗಳ ಮೊದಲು ಇದ್ದ ಅಧಿಕಾರಿಗಳು ತಿಂಗಳಿಗೊಂದು ಬಾರಿ ಎಲ್ಲಾ ಹಾಲು ಮಾರುವವರ ಹಾಲನ್ನು ಪರೀಕ್ಷಿಸುತ್ತಿದ್ದರು. ಈಗ ಶೃಂಗೇರಿಯಲ್ಲಿ ಆ ಪದ್ಧತಿ ಅಳಿದು ಎಷ್ಟೋ ಸಮಯವಾಗಿದೆ. ಪರಿಸ್ಥಿತಿ ಹೀಗೇ ಮುಂದುವರಿದರೆ ನಾವು "ಗೃಹಣಿಯರು" ಪುರಭವನದ ಮುಂದೆ ಧರಣಿ ಕೂರಬೇಕಾಗಬಹುದೇನೋ. ಸಂಬಂಧ ಪಟ್ಟವರು ಅಷ್ಟಕ್ಕೆ ಅವಕಾಶ ಕೊಡದೆ ಸ್ವಲ್ಪವಾರೂ ಉತ್ತಮವಾದ ಹಾಲು ದೊರೆಯುವಂತೆ ಕ್ರಮ ಕೈಗೊಳ್ಳುತ್ತಾರೆಂದು ನಂಬುತ್ತೇವೆ.

—"ಗೃಹಣಿಯರು"
(೯ ಜನರ ಸಹಿ ಇದೆ.)
ಶೃಂಗೇರಿ.

## ಹಿರೇಕೊಡಿಗೆ ಅಂಚೆ: ಪೋಸ್ಟ್ ಮಾಸ್ಟರ ವಿವರಣೆ

ಸೂರ್ಯದೇವಸ್ಥಾನ ಶಾಖಾ ಅಂಚೆ ಕಚೇರಿಯ ವ್ಯಾಪ್ತಿಯಲ್ಲಿ **ಹಿರೇಕೊಡಿಗೆ** ಎಂಬ ಹಳ್ಳಿಯೊಂದು ಇದೆ. ಈ ಹಳ್ಳಿಗೆ ಬರೆದ ಪತ್ರಗಳು ವಿಳಾಸ ಪೂರ್ತಿ ಸರಿಯಿದ್ದರೂ ಹಿರೇಕೊಡಿಗೆ (ಗಡಿಕಲ್) **ಅಂಚೆಗೆ** ಹೋಗಿ ತಡವಾಗಿ ಬರುತ್ತವೆ, ಕೆಲವು ಕಳೆದು ಹೋಗುತ್ತವೆ ಎಂದು ಅಲ್ಲಿನ ನಿವಾಸಿ ಹೆಚ್. ಟಿ. ಕೃಷ್ಣಮೂರ್ತಿ ಬರೆದಿದ್ದರು. ಈ ವಿಷಯ ಕೊಪ್ಪದ ಪೋಸ್ಟ್‌ಮಾಸ್ಟರ್‌ರವರಿಗೆ ನಾವು ತಿಳಿಸಿ, ಅವರೊಂದಿಗೆ ಚರ್ಚಿಸಿದಾಗ, ಹೀಗೆ ಒಂದೇ ಹೆಸರಿನ ೨ ಊರುಗಳಿರುವ ವಿಷಯವನ್ನು ಪ್ರಮುಖ ಅಂಚೆ ಕಚೇರಿಗಳಿಗೂ ಬೀರೂರು ಆರ್ ಎಂ ಎಸ್ ಕಚೇರಿಗೂ ತಿಳಿಸಿ, ಈ ಹಳ್ಳಿಯ ವಿಳಾಸವಿರುವ ಪತ್ರಗಳ ಬಗ್ಗೆ ಜಾಗ್ರತೆ ವಹಿಸಲು ಸೂಚಿಸಿದ್ದು, ತಮ್ಮ ಕಚೇರಿಯಲ್ಲೂ ಈ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲಾಗಿದೆ ಎಂದು ತಿಳಿಸಿದ್ದಾರೆ.

ಹಾಗೆಯೇ, ಈ ಹಳ್ಳಿಯ ನಾಗರಿಕರು ತಮ್ಮ ವಿಳಾಸ ಕೊಡುವಾಗ '**ಸೂರ್ಯ ದೇವಸ್ಥಾನ ಅಂಚೆ**' ಎಂಬುದನ್ನು ಸ್ಪಷ್ಟವಾಗಿ ನಮೂದಿಸುವಂತೆಯೂ ಪೋಸ್ಟ್‌ಮಾಸ್ಟರ್‌ರವರು ಕೋರಿದ್ದಾರೆ.

## ರಿಪೇರಿಕಾಣದ ಗ್ರಾಮ ಪಂಚಾಯ್ತಿ ರಸ್ತೆಗಳು

ಗ್ರಾಮ ಪಂಚಾಯ್ತಿಯ ವ್ಯಾಪ್ತಿಗೆ ಒಳಪಡುವ ಹಳ್ಳಿಗಗಿಡಿನ ರಸ್ತೆಗಳ ಮೇಲೆ ಹಳ್ಳಿಗಳ ಸಮಸ್ತ ಚಟುವಟಿಕೆಗಳೂ ಅವಲಂಬಿಸಿರುತ್ತವೆ. ಮುಖ್ಯವಾಗಿ ಶಾಲಾ ಮಕ್ಕಳು, ಚಿಕ್ಕಮಕ್ಕಳು, ವೃದ್ಧರು, ತಲೆಹೊರೆಯವರು ಮುಂತಾದವರು ತಿರುಗಾಡುವ ಈ ರಸ್ತೆಗಳು ಗುಂಡಿ, ಕೊರಕಲುಗಳಿಂದ ಕೂಡಿದ್ದರೆ ಅದು ಎಂಥ ಅಪಾಯ ಎಂದು ಅನುಭವಿಸಿದವರಿಗೆ ಗೊತ್ತು.

ಹರಿಹರಪುರ ಪಂಚಾಯ್ತಿ ವ್ಯಾಪ್ತಿಗೆ ಸೇರಿದ ಸೂರಳಿ ಗ್ರಾಮದ ರಸ್ತೆಗಳು ಇದಕ್ಕೆ ಒಂದು ನಿದರ್ಶನ. ಅಡ್ಡಗದ್ದೆ, ಹೊನಗೋಡು, ಹೊಸೊಳ್ಳಿ, ಕಂಚಿತೋಟ, ನೀರುಳ್ಳಿ ಮುಂತಾದ ಹಳ್ಳಿಗಳಿಂದ ಮಕ್ಕಳು ಶಾಲ್ಲಾದಿಗೆಯಲ್ಲಿ ಈ ಮಾರ್ಗವಾಗಿಯೇ

(ಮುಂದಿನ ಪುಟಕ್ಕೆ)

# "ಶಾಸಕರು ಗಮನಿಸಲಿ"

ಶಾಸಕರಾಗಿ ಏಳು ತಿಂಗಳುಗಳು ಕಳೆದರೂ ಹುಲಿಗರಡಿ ಎಂಬ ಗ್ರಾಮಕ್ಕೆ ನಮ್ಮ ಶಾಸಕರು ಭೇಟಿ ಕೊಟ್ಟಿಲ್ಲ. ಪಾದಯಾತ್ರೆಯಲ್ಲಿ ಅವರು ಬರುವುದು ಬೇಡ. ಕಾರಿನಲ್ಲಿ ಬಂದರೂ ಪರವಾಗಿಲ್ಲ. ಗಿರಿಜನರ ಸುಳ್ಳು ಆರೋಪಗಳಿಗೆ ಸಹಿ ಹಾಕಿ ವಿಚಾರಿಸಲು ಆಗ್ರಹಪಡಿಸುವ ಈ ಶಾಸಕರು ಈ ಗ್ರಾಮದ (ಹುಲಿಗರಡಿ)ರಸ್ತೆಗಾಗಿ, ಅಥವಾ ಇಂತಹಾಯಾವುದಾದರೂ ಜನೋಪಯೋಗಿ ಕಾರ್ಯದತ್ತ ಗಮನ ಹರಿಸಿದರೆ ಜನತೆ ಓಟು ನೀಡಿದಕ್ಕೆ ಸಾರ್ಥಕವಾಗುತ್ತಿತ್ತು. ಆದರೆ ಶಾಸಕರೇ ಬರದೆ ಕಾರ್ಯವೇನುತಾನೇ ಆದೀತು?

—ಓಟು ಕೊಟ್ಟವ,
ಹುಲಿಗರಡಿ.

**ಸಂಪಾದಕನ ಅನಿಸಿಕೆ:** 'ಆರೋಪದ ಬಗ್ಗೆ ವಿಚಾರಣೆ ನಡೆಸಿ' ಎಂದು ಶಾಸಕರು ಸಂಬಂಧಪಟ್ಟವರಿಗೆ ಆದೇಶಿಸುವುದು ತಪ್ಪೆ? ಆರೋಪ ನಿಜವೋ ಸುಳ್ಳೋ ಎಂದು ಇತ್ಯರ್ಥವಾಗಬೇಕಾದರೆ ವಿಚಾರಣೆ ಆಗಬೇಕು ತಾನೆ? ಒಂದು ಆರೋಪ ನಿಜವೋ ಸುಳ್ಳೋ ಎಂದು ಶಾಸಕರಿಗೇ ಆಗಲಿ, ಯಾರಿಗೇ ಆಗಲಿ, ಮುಂಚಿತವಾಗಿಯೇ ಗೊತ್ತಿರುವುದೇ? ಹಾಗೆ ನೋಡಿದರೆ, ನಿಮ್ಮ ಎಷ್ಟೋ ದೂರುಗಳ ಬಗ್ಗೆ ಅಧಿಕಾರಿಗಳು ಗಮನ ಕೊಡದಿದ್ದಾಗ ನೀವೂ ಶಾಸಕರಂಥವರ ಹತ್ತಿರವೇ ತಾನೆ ನಿಮ್ಮ ಅಹವಾಲು ಒಯ್ಯುತ್ತೀರಿ? ಶಾಸಕರೇನೂ ನೇರವಾಗಿ ಶಿಕ್ಷೆ ಕೊಡಲು ಆದೇಶಿಸಿರಲಿಲ್ಲವಷ್ಟೇ? ಅದರಲ್ಲೂ ದುರ್ಬಲ ವರ್ಗದವರ ದೂರುಗಳಿಗೆ ಅಧಿಕಾರಿಗಳು ಕಿವಿಗೊಡಬೇಕಾದರೆ ಯಾರದಾದರೂ ಶಿಫಾರಸು ಬೇಕೇ ಬೇಕು ಎಂಬ ಪರಿಸ್ಥಿತಿಯಲ್ಲಿ ನಾವಿದ್ದೇವೆ. ಇದಕ್ಕಾಗಿ ಶಾಸಕರನ್ನೇಕೆ ಆಕ್ಷೇಪಿಸಬೇಕು? ಅವರ ಹತ್ತಿರ ದೂರುಒಯ್ದರೆ ಅಷ್ಟಾದರೂ ಗಮನ ಕೊಡುತ್ತಾರಲ್ಲ ಎಂದು ಅವರನ್ನು ಅಭಿನಂದಿಸುವುದು ನ್ಯಾಯವಲ್ಲವೆ? ಶಾಸಕರ ತಪ್ಪಿದ್ದರೆ ಎಷ್ಟೇ ಕಟುವಾಗಿ ಬೇಕಾದರೂ ಟೀಕಿಸೋಣ. ಆದರೆ ವಿನಾಕಾರಣ ಟೀಕಿಸುವ ಹಕ್ಕು ಓಟುಕೊಟ್ಟಮಾತ್ರಕ್ಕೆ ನಮಗೆ ಬರುವುದಿಲ್ಲ ಅಲ್ಲವೇ? ದಯವಿಟ್ಟು ಯೋಚಿಸಿ.

—ಸಂಪಾದಕ.

## ದರೆ ತೊಳೆದು ತೋಟ: ನೆರೆಯವರಿಗೆ ಹಾನಿ

ಮಾನ್ಯರೆ,

ಹೆಗ್ಗಾರು ಗ್ರಾಮ ಆಲಕ್ಕಿ ವಾಸಿ ವೆಂಕಟಕೃಷ್ಣಪ್ಪ ಎಂಬವರು ತಮ್ಮ ಬಾಗಾಯ್ತಿನ ಪಕ್ಕದಲ್ಲಿರುವ ಸರ್ಕಾರಿ ಅರಣ್ಯವನ್ನು ನಾಶ ಮಾಡಿ, ದರೆತೊಳೆದು ತೋಟಮಾಡುತ್ತಿದ್ದಾರೆ. ಇದರಿಂದ ಈ ತೋಟದ ಪಕ್ಕದ ತೋಟದವರಾದ ಎ. ಎನ್. ವೆಂಕಟೇಶ ಇವರಿಗೆ ಭಾರಿ ಹಾನಿಯಾಗುತ್ತಿದೆ. ತೋಟದ ತುಂಬಾ ಎರಡು ಅಡಿ ಮರಳು ಶೇಖರವಾಗುತ್ತಿದೆ. ದರೆ ತೊಳೆಯುವ ಕೆಲಸ ಕೈಬಿಡುವಂತೆ ವೆಂಕಟಕೃಷ್ಣಪ್ಪನವರಿಗೆ ಮಾಡಿದ ಮನವಿ ಫಲಕಾರಿಯಾಗಿಲ್ಲ.

ಈ ಬಗ್ಗೆ ೨೭-೭-೮೩ ರಂದು ಕೊಪ್ಪದ ತಹಸೀಲ್ದಾರ್‌ರವರಿಗೆ ವೆಂಕಟೇಶ್ ಅವರು ರಿಜಿಸ್ಟರ್ಡ್ ಅಂಚೆಮೂಲಕ ಅರ್ಜಿ ಕಳಿಸಿದ್ದಾರೆ. ಆದರೂ ಈವರೆಗೆ (೧೨-೮-೮೩) ವಿಚಾರಣೆಗೆ ಬರಲಿಲ್ಲ. ಹಣಕಾಸಿನ ವ್ಯವಹಾರ ಏನಾದರು ನಡೆದಿರಬಹುದೇ ಎಂದು ವೆಂಕಟೇಶ್ ಅನುಮಾನಪಡುತ್ತಿದ್ದಾರೆ.

ಹೀಗೆ ದರೆ ತೊಳೆಯುವುದರಿಂದ ಅರಣ್ಯ ನಾಶ, ಪಕ್ಕದ ತೋಟದವರಿಗೆ ಹಾನಿ ಹಾಗೂ ಜಲಾಶಯಗಳಲ್ಲಿ ಹೂಳು ತುಂಬಿಕೊಳ್ಳುವುದು — ಈ ಮೂರು ವಿಧದ ತೊಂದರೆಗಳಿರುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೆ?

—ಬಿ. ಕೆ. ನಾಗರಾಜ್, ಮೇಗೂರು.

## ಗೋಮಾಳದ ದರ್ಖಾಸ್ತು ಮಂಜುರಾತಿಗೆ ವಿರೋಧ

ಬಿಂತ್ರವಳ್ಳಿ ಗ್ರಾಮದ ಸ. ನಂ. ೫೩ ರಲ್ಲಿ ಗೋಮಾಳಕ್ಕಾಗಿ ಮೀಸಲಿಡಲಾಗಿದ್ದ ಪ್ರದೇಶವನ್ನು ಈಚೆಗೆ ಕೊಪ್ಪದ ಬಲಿಷ್ಠ ಶ್ರೀಮಂತರೊಬ್ಬರಿಗೆ ದರ್ಖಾಸ್ತು ಮಾಡಿ ಕೊಡುವ ವ್ಯವಸ್ಥೆ ನಡೆದಿದೆ. ಈ ಸುತ್ತಮುತ್ತಲ್ಲ ಕಾಫಿ ತೋಟಗಳಿದ್ದು ಜಾನುವಾರುಗಳ ಮೇವಿಗೂ, ಜಮೀನಿನ ಸೊಪ್ಪು-ದರಗುಗಳಿಗೂ ಈ ಜಾಗ ಬಿಟ್ಟರೆ ಬೇರೆ ಇಲ್ಲ. ಹೀಗಿರುವಾಗ ಸದರಿ ಶ್ರೀಮಂತರು ದರ್ಖಾಸ್ತು ಮಂಜೂರಾಗುವ ಮೊದಲೇ ಆ ಜಾಗಕ್ಕೆ ತಂತಿ ಬೇಲಿ ಹಾಕಿ, ಜಾನುವಾರುಗಳ ಪ್ರವೇಶವನ್ನು ತಡೆದಿದ್ದಾರೆ. ಮತ್ತು ಬೆದರಿಕೆ ಹಾಕುತ್ತಿದ್ದಾರೆ. ಈ ದರ್ಖಾಸ್ತು ನೀಡುವ ಬಗ್ಗೆ ಗ್ರಾಮಸ್ಥರನ್ನು ಕೇಳಿಯೇ ಇಲ್ಲ.

ಈ ದರ್ಖಾಸ್ತು ನೀಡದಿರುವಂತೆ ಹಾಗೂ ಅಕ್ರಮ ತಂತಿ ಬೇಲಿ ತೆಗೆಸುವಂತೆ ನಾವು ಶಾಸಕರಿಗೂ ಮತ್ತು ಸಂಬಂಧಪಟ್ಟ ಎಲ್ಲ ಅಧಿಕಾರಿಗಳಿಗೂ ಬರೆದಿದ್ದು ನಿಷ್ಪ್ರಯೋಜಕವಾಗಿದೆ. ನಿಮ್ಮ ಪತ್ರಿಕೆಯ ಮೂಲಕವಾದರೂ ಈ ನಮ್ಮ ಗೋಳಿನತ್ತ ಸಂಬಂಧಪಟ್ಟವರ ಗಮನ ಹರಿದು ನಮಗೆ ನ್ಯಾಯ ದೊರೆತೀತೆಂದು ಆಶಿಸುತ್ತೇವೆ.

—ನೊಂದ ಗ್ರಾಮಸ್ಥರು,
(೭ ಜನರ ಸಹಿ ಇದೆ.)
ಬೇರುಕುಡಿಗೆ.

**ಮೇಲಿನ ಎರಡೂ ಪತ್ರಗಳ ಬಗ್ಗೆ ಪ್ರತಿಕ್ರಿಯೆ ಕೇಳಿ ಹಾಗೂ ಸಂಗತಿ ನಿಜವಿದ್ದಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳಲು ಕೋರಿ ಕೊಪ್ಪದ ತಹಸೀಲ್ದಾರರಿಗೆ ನಾವು ಬರೆದ ಪತ್ರಕ್ಕೆ ಈವರೆಗೂ ಉತ್ತರ ಬಂದಿಲ್ಲ.** —ಸಂಪಾದಕ.



## ಮಾ ಸಾ ಶ ನ

(೨ನೇ ಪುಟದಿಂದ)

ಹೆಚ್ಚಿಗೆ ಚರ್ಚೆ ಮಾಡುತ್ತ ಕೂತರೆ ಹಾಕಿದ್ದೂ ಇಳಿದು ಹೋದೀತು, ಬಾ" ಎಂದು ಎಳೆದುಕೊಂಡು ಹೊರಟೆ. ನನಗೆ ಮಾತ್ರ ಒಳಗಿನ 'ಎಣ್ಣೆ'ಗಿಂತ ಇವನ ಈ ಅದ್ಭುತವಾದ ರಾಷ್ಟ್ರೀಯ ಉತ್ಪನ್ನದ ಸಿದ್ಧಾಂತ 'ಕಿಕ್' ಕೊಡುತ್ತಿತ್ತು !

## ಬೆಳೆಗಾರರಿಗೆ ವ್ಯಥೆಯಾಗಿರುವ ಏಲಕ್ಕಿ

(ವರದಿ: ಕಲಬಿ ಶ್ರೀನಿವಾಸ್)

ಆಗಳಗಂಡಿ: ಇಲ್ಲಿಗೆ ಸಮೀಪದ ಹುಲಿಗರಡಿ ಗ್ರಾಮದ ಜನತೆಗೆ ಏಲಕ್ಕಿ ಬೆಳೆಯನ್ನು ಉಳಿಸಿಕೊಳ್ಳುವುದೇ ಕಷ್ಟಕರವೆಂದು ಕಾಣಬರುತ್ತಿದೆ. ಒಮ್ಮೆ ಆಶಾದಾಯಕವಾಗಿ ಕಂಡಿದ್ದ ಈ ಬೆಳೆ ಈಗ ವ್ಯಥೆತರುವ ಬೆಳೆಯಾಗತೊಡಗಿದೆ. ಕಾರಣ, ಈಗಾಗಲೇ ಎರಡು ಕಡೆಗಳಲ್ಲಿ ಏಲಕ್ಕಿ ಬೆಳೆಯ ಕಳ್ಳತನ ನಡೆದಿದೆ. ಎರಡು ಕಡೆಗಳಲ್ಲೂ ಸುಮಾರು ೩೦ ಕೆ.ಜಿ. ಏಲಕ್ಕಿ ಹೋಗಿರಬಹುದು. ಸುಮಾರು ೧೨೦ ಬುಡದಲ್ಲಿ ಧ್ವಂಸ ಮಾಡಿ, ದರೋಡೆ ನಡೆಸಿದ್ದಾರೆ.

ಆದರೆ ಕಳ್ಳರ ಬಗ್ಗೆ ಶಂಕೆ ಪಡುವಂತಿಲ್ಲ. ಕಳೆದ ವರ್ಷ ಕದಿಯುತ್ತಿರುವಾಗಲೇ ಸಿಕ್ಕಿಬಿದ್ದ ಗಿರಿಜನನೊಬ್ಬನನ್ನು ಈ ವರ್ಷವೂ ಶಂಕಿಸಿ, ಆತನನ್ನು ವಿಶ್ವಾಸದಿಂದಲೇ ಪ್ರಶ್ನಿಸಿದ್ದಕ್ಕೆ ದೊರೆತ ಪರಿಹಾರವೆಂದರೆ, ಆತನ ಮನೆಯಲ್ಲಿರುವ ಮಹಿಳೆಯೊಬ್ಬಳಿಂದ ಗ್ರಾಮದ ಸಂಪನ್ನ ಯುವಕರಿಬ್ಬರ ಮೇಲೆ 'ಅತ್ಯಾಚಾರಕ್ಕೆ ಪ್ರಯತ್ನಿಸಿದ'ರೆಂಬ ಸುಳ್ಳು ಆಪಾದನೆ! ಇದರ ದೂರು ಶಾಸಕರ ಸಹಿಯೊಂದಿಗೆ ಎಸ್. ಐ. ಗೆ ರವಾನೆ.

ಗ್ರಾಮಸ್ಥರಿಗೆ ಇವರೇ ಏಲಕ್ಕಿ ಕದಿಯುತ್ತಿರುವ ಶಂಕೆಯಿದೆ. ಈ ಗುಂಪಿಗೆ ಆ ಮಹಿಳೆಯೇ ನಾಯಕಿ ಎನ್ನಲಾಗಿದೆ.

## ರಿಪೇರಿ ಕಾಣದ ರಸ್ತೆಗಳು

(೩ನೇ ಪುಟದಿಂದ)

ಹರಿಹರಪುರ ಶಾಲೆಗೆ ಹೋಗುತ್ತಾರೆ. ಆದ್ದರಿಂದ ಈ ಬಗ್ಗೆ ಅಸಡ್ಡೆ ಮಾಡದೆ ಪಂಚಾಯ್ತಿಯ ಸದಸ್ಯರು, ಅಧ್ಯಕ್ಷರು ಗಮನ ಹರಿಸಬೇಕು. ನಡೆದ ಅಲ್ಪ ಸ್ವಲ್ಪ ಕೆಲಸಗಳೂ ಪ್ರಾಮಾಣಿಕವಾಗಿ ನಡೆದಿಲ್ಲ. ಹಣದ ದುರ್ವಿನಿಯೋಗವಾಗಿದೆ. ಈ ತೊಂದರೆಗಳನ್ನು ಮುಂದಾದರೂ ಗಮನಿಸಿ ದೇಶದ ಬುನಾದಿಯಾದ ರೈತರ ಈ ಚಿಕ್ಕ ಕೊರತೆಯನ್ನು ಸಂಬಂಧಪಟ್ಟವರು ತಿಳಿದುಕೊಂಡು, ಯೋಗ್ಯ ಕೆಲಸಗಾರರಿಂದ ದುರಸ್ತಿ ಮಾಡಿಸುವರೆಂದು ಆಶಿಸೋಣವೆ?

ಸೂರಳಿ ಗ್ರಾಮದ ರೈತರ ಪರವಾಗಿ
**ಸೂರಳಿ ಗಣೇಶಮೂರ್ತಿ.**

## ಕೊಪ್ಪ ತಾ|| ಮಟ್ಟದ ರಾಷ್ಟ್ರಗೀತೆ ಸ್ಪರ್ಧೆಯ ವೈಯಕ್ತಿಕ ವಿಜೇತರು

ಕೊಪ್ಪ: ಭಾರತ ಸೇವಾದಳ ಸಂಸ್ಥೆ ಈ ಸಲದ ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ ಆ. ೧೨ ರಂದು ಇಲ್ಲಿ ನಡೆಸಿದ ತಾ|| ಮಟ್ಟದ ರಾಷ್ಟ್ರಗೀತೆ ಸ್ಪರ್ಧೆಯಲ್ಲಿ ಕೆ.ಪ್ರಾ. ಶಾಲೆಗಳ ವೈಯಕ್ತಿಕ ವಿಭಾಗದಲ್ಲಿ ತನೂಡಿ ಶಾಲೆಯ ಟಿ. ಎಸ್. ವಿಶಾಲ ಪ್ರಥಮ ಬಹುಮಾನ ಪಡೆದಿದ್ದಾಳೆ. ಎರಡನೇ ಮತ್ತು ಮೂರನೇ ಸ್ಥಾನವನ್ನು ಭುವನಕೋಟಿ ಕಿ. ಪ್ರಾ. ಶಾಲೆಯ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿ ಪಡೆದರು.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
**ಸಿರಿಮನೆ ನಾಗರಾಜ್.**
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ

## ನೆಡುತೋಪು ಉದ್ಘಾಟನೆ

ಗುಡ್ಡೆತೋಟ: ಇಲ್ಲಿನ ಗ್ರಾಮಪಂಚಾಯ್ತಿ ಮತ್ತು ಅರಣ್ಯ ಇಲಾಖೆಗಳ ಸಂಯುಕ್ತ ಆಶ್ರಯದಲ್ಲಿ ಪಂಚಾಯ್ತಿಗೆ ಸೇರಿದ ಏಳು ಹೆಕ್ಟೇರ್ ಪ್ರದೇಶದಲ್ಲಿ ವಿವಿಧ ಜಾತಿಯ ಗಿಡ, ಮರ, ಮತ್ತು ಹಣ್ಣು–ಹಂಪಲುಗಳ ಗಿಡಗಳನ್ನು ನೆಡುವ ಕಾರ್ಯಕ್ರಮವನ್ನು ಜಯಪುರ ಪಂ. ಅಧ್ಯಕ್ಷ ಎ. ಸಿ. ವಜ್ರಪ್ಪ ಅವರ ಅಧ್ಯಕ್ಷತೆಯಲ್ಲಿ ತಹಸೀಲ್ದಾರ್ ಹೆಚ್. ಎಂ. ನಾಗಪ್ಪ ಸೆ. ೧ ರಂದು ಉದ್ಘಾಟಿಸಿದರು.

ಇದೇ ಸಂದರ್ಭದಲ್ಲಿ ಅಂಗನವಾಡಿಯ ಮಕ್ಕಳಿಗೆ ಮೈತ್ರಿಮಹಿಳಾ ಸಮಾಜದ ಕೊಡುಗೆಯಾದ ಶಿಕ್ಷಣ ಸಾಮಗ್ರಿಗಳನ್ನು ಪಂ. ಸದಸ್ಯ ಸೀನಪ್ಪ ಹಂಚಿದರು. ಪಂಚಾಯ್ತಿಯ ಶೇ. ೧೮ರ ಅನುದಾನದಲ್ಲಿ ಶಾಲೆಯ ಹರಿಜನ–ಗಿರಿಜನ ಮಕ್ಕಳಿಗೆ ಸಮವಸ್ತ್ರಗಳನ್ನು ವ|| ಅರಣ್ಯಾಧಿಕಾರಿ ಅಬ್ದುಲ್ ಗಫಾರ್ ಅವರೂ, ಹರಿಜನ– ಗಿರಿಜನರಿಗೆ ಬಟ್ಟೆಗಳನ್ನು ಪಂ. ಅಧ್ಯಕ್ಷ ಮೊಹಿಯುದ್ದೀನ್ ಅವರೂ ಹಂಚಿದರು.

ಜಿ. ಎಸ್. ಸುಬ್ಬರಾವ್ ಸ್ವಾಗತ ಮತ್ತು ಪರಿಚಯ ಮಾಡಿದರು. ಜಿ. ಎಸ್. ಅನಂತ ರಾವ್ ವಂದಿಸಿದರು.

## ಪಠ್ಯಪುಸ್ತಕಗಳಿಲ್ಲ

(ನಮ್ಮ ಪ್ರತಿನಿಧಿಯಿಂದ)

ಕುದ್ರೆಗುಂಡಿ: ಶಾಲೆಗಳು ಶುರುವಾಗಿ ಎರಡೂವರೆ ತಿಂಗಳು ಕಳೆದಿವೆ. ಆದರೆ ಇನ್ನೂ ಎಷ್ಟೋ ವಿಷಯಗಳಲ್ಲಿ ಪಠ್ಯ ಪುಸ್ತಕಗಳೇ ಬಂದಿಲ್ಲ. ಶಾಲೆಗೆ ಪುಸ್ತಕ ತರದಿದ್ದರೆ ಮಕ್ಕಳನ್ನು ಮನೆಗೆ ಹೋಗಲು ಹೇಳುತ್ತಾರೆ. ಇತ್ತ ಗಮನ ಕೊಡುವ ಅಧಿಕಾರಿ ಯಾರೂ ಇಲ್ಲವೆ? ಎಂದು ಪೋಷಕರು ಕೇಳುತ್ತಿದ್ದಾರೆ.

## ಒಂದು ಲಕ್ಷ ಹದಿನೈದು ಸಾವಿರ, ಆಹಾ!

(೧ನೇ ಪುಟದಿಂದ)

ಸಾಗರಕ್ಕೆ ಬಂದು ಇಬ್ಬರೂ ಮನೆ ಸೇರಿಕೊಂಡರು.

ಆದರೆ ಅಷ್ಟರಲ್ಲಿ ರಾಮುಭಟ್, ಕಂಡಕ್ಟರ್ ಪ್ರಶಾಂತ್ ಇವರುಗಳ ಹೇಳಿಕೆಗಳ ಆಧಾರದ ಮೇಲೆ ಅನುಮಾನದ ಬಲೆ ಹೆಣೆದ ಪೋಲೀಸ್‌ಪಡೆ ಕೇವಲ ಮೂರು ದಿನದೊಳಗೆ ಇವರನ್ನು ಹಣದ ಸಮೇತ ಬಂಧಿಸಿತು. ಶಿವಮೊಗ್ಗ ಮತ್ತು ತೀರ್ಥಹಳ್ಳಿಗಳಲ್ಲಿ ಅವರನ್ನು ಪತ್ರಕರ್ತರಿಗೆ ಪ್ರದರ್ಶಿಸಿ ಪೋಲೀಸ್ ಅಧಿಕಾರಿಗಳು ವಿವರಗಳನ್ನು ನೀಡಿದರು. ಎಲ್ಲೆಡೆಯಿಂದ ಪೋಲೀಸರಿಗೆ ಅಭಿನಂದನೆಗಳ ಸುರಿಮಳೆಯಾಯಿತು.

ಮಲೆನಾಡಿನ ಮಟ್ಟಿಗೆ ಸುಮಾರು ೨೫ ವರ್ಷಗಳ ಹಿಂದಿನ ಭೀಕರ ಹಂದಿಗೋಡು ಕೊಲೆಯ ನಂತರ ಇದೇ ಅತಿ ದೊಡ್ಡ ಮತ್ತು ಭೀಕರ ಕೊಲೆ ಪ್ರಕರಣವಿರಬೇಕು. ಅಂತೂ ಇದರಲ್ಲಿ, ೨೫ರ ಆಜುಬಾಜಿನ, ಅವಿವಾಹಿತರಾದ ೬ ಮನುಷ್ಯ ಜೀವಗಳು ಮಣ್ಣು ಪಾಲಾದವು—೪ ಪೂರ್ತಿ ಸತ್ತು, ಇನ್ನೆರಡು ಇದ್ದೂ ಸತ್ತು! ಗ್ರಾಮೋದ್ಯೋಗದ ಸುಬ್ಬಣ್ಣ ನಾಯಕರು ಬ್ಯಾಂಕಿನ ಮೂಲಕ ಹಣ ತರಿಸದೆ ಲಾರಿಯಲ್ಲೇ ಸಾಗಿಸುವ ಉಳಿತಾಯ ಕ್ರಮದಿಂದ ಈ ೬ ಜೀವಗಳನ್ನೂ ಬಲಿಗೊಂಡರೆಂದರೆ ತಪ್ಪಾದೀತೆ?

ಇಷ್ಟು 'ಸಾಹಸ' ಪಟ್ಟು ಹಾರಿಸಿದ ಆ ೧ ಲಕ್ಷ ೧೫ ಸಾವಿರದಲ್ಲಿ ಚಂದ್ರಶೇಖರ ಮತ್ತು ಮಹಮದ್ ಖರ್ಚುಮಾಡಿದ್ದು ೪೪೫ ರೂ. ಮಾತ್ರ! §§

## ಸರ್ಕಾರಿ ಕಿರಿಯ ಕಾಲೇಜು

**ಕಮ್ಮರಡಿ, ಕೊಪ್ಪ ತಾಲ್ಲೂಕ್**

ಕಮ್ಮರಡಿ ಸರ್ಕಾರಿ ಕಿರಿಯಕಾಲೇಜಿನಲ್ಲಿ ೧೯೮೩–೮೪ ನೇ ಸಾಲಿನ ಪ್ರಥಮ ಪಿ. ಯು. ಸಿ.ಯಲ್ಲಿ ವಾಣಿಜ್ಯ ವಿಭಾಗ ಪ್ರಾರಂಭಿಸಲು ಇಲಾಖೆಯಿಂದ ಅನುಮತಿ ದೊರೆತಿದ್ದು, ದಾಖಲಾತಿಯನ್ನು ಮಾಡಿಕೊಳ್ಳಲಾಗುತ್ತಿದೆ. ವಿದ್ಯಾರ್ಥಿಗಳು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬೇಕಾಗಿ ಕೋರಿದೆ.

ತಾ|| ೩–೯–೮೩. ಪ್ರಾಚಾರ್ಯರು.